KA / BG-GPO/2515/WPP-47/2006-2008 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೨೩, ೨೦೦೬ (ಚೈತ್ರ ೨, ಶಕವರ್ಷ ೧೯೨೮) | ಸಂಚಿಕೆ ೧೨

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಕಛೇರಿ**
**ಸಂಕ್ಷಿಪ್ತ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**
**ಸಂಖ್ಯೆ: ಎ3-ಸಿಬ್ಬಂದಿ:ಅಮೊ:71(ಎ):ವಾಹನ: ಸಿಆರ್-53/ 2003-04, ದಿನಾಂಕ:1ನೇ ಮಾರ್ಚ್, 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ವನ್ಯಜೀವಿ ವಿಭಾಗ ಶಿವಮೊಗ್ಗದ ವ್ಯಾಪ್ತಿಯಲ್ಲಿ ಬರುವ ಸಕ್ರೆಬೈಲು ವನ್ಯಜೀವಿ ವಲಯದಲ್ಲಿ ಅರಣ್ಯ ಮೊಕದ್ದಮೆಗಳಲ್ಲಿ ಅಮಾನತ್ತುಪಡಿಸಿ, ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡ ಈ ಕೆಳಕಂಡ ವಾಹನಗಳನ್ನು ಎಲ್ಲಿವೆಯೋ, ಹೇಗಿದೆಯೋ ಹಾಗೆಯೇ ಸಂಬಂಧಿಸಿದ ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಕಛೇರಿ ಆವರಣದಲ್ಲಿ ದಿನಾಂಕ: 17.04.2006ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ರವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟವರಿಂದಾಗಲಿ ನಿಗದಿತ ಷರತ್ತುಗಳಿಗೆ ಒಳಪಟ್ಟಂತೆ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಇಷ್ಟವುಳ್ಳವರು ನಿಗದಿಪಡಿಸಿದ ಠೇವಣಿ ಹಣವನ್ನು ಮುಂಗಡವಾಗಿ ಕಟ್ಟಿ, ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ ಷರತ್ತಿಗೆ ಅನುಗುಣವಾಗಿ ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

**ಅನುಸೂಚಿ**

| ಕ್ರ. ಸಂ. | ವಾಹನಗಳ ವಿವರ ಮತ್ತು ನೊಂದಣಿ ಸಂಖ್ಯೆ | ಸ್ಥಳ | ಟೆಂಡರ್ ಮತ್ತು ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|
| 1. | ಬಜಾಜ್ ಚೇತಕ್ ಸ್ಕೂಟರ್ ಕೆಎ-14-ಹೆಚ್-9181 | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಗಾಜನೂರು. | ದಿನಾಂಕ: 17.04.2006ರಂದು ಬೆಳಿಗ್ಗೆ 10.00 ರಿಂದ 12.00 ವರೆಗೆ. |
| 2. | ಫಿಯಟ್ ಕಾರ್ ಎಂಇಟಿ-8925 | | |
| 3. | ಬಜಾಜ್ ಚೇತಕ್ ಸ್ಕೂಟರ್ ಕೆಎ-14-ಹೆಚ್-5168 | | |
| 4. | ಕಾಂಟೆಸ್ಸಾ ಕ್ಲಾಸಿಕ್ ಕಾರ್ ಎಂಹೆಚ್-01-ಎ-476 | | |
| 5. | ಮೆಟಡೋರ್ ಕೆಎ-20-3325 | | |
| 6. | ಕಾವಸಾಕಿ ಬಜಾಜ್ ಬೈಕ್ ಸಿಟಿಟಿ-964 | | |
| 7. | ಹೀರೋಹೊಂಡ ಸ್ಪ್ಲೆಂಡರ್ ಬೈಕ್ ಕೆಎ-20-ಜೆ-5604 | | |
| 8. | ಬಜಾಜ್ ಕಾವಾಸಾಕಿ ಕೆಬಿ-100, ಬೈಕ್ ಕೆಎ-20-ಇ-2652 | | |
| 9. | ಮಹೇಂದ್ರ ಜೀಪು ಎಂವೈಕೆ-696 | | |

**ಟೆಂಡರ್ ಕಂ ಹರಾಜಿನ ಷರತ್ತುಗಳು**

1. ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವ ವ್ಯಕ್ತಿಗಳು ಟೆಂಡರ್ ಹಾಗೂ ಹರಾಜಿನ ಮುಂಚಿತವಾಗಿ ವಾಹನಗಳು ಎಲ್ಲಿವೆಯೋ, ಅಲ್ಲಿಯೇ ಪರೀಕ್ಷಿಸಿ, ನಂತರ ಭಾಗವಹಿಸುವುದು, ಹರಾಜು ಮುಗಿದ ನಂತರ ವಾಹನದ ಸ್ಥಿತಿಗಳ ಬಗ್ಗೆ ಎತ್ತುವ ಯಾವುದೇ ಆಕ್ಷೇಪಣೆಗಳಿಗೆ ಮಾನ್ಯತೆ ನೀಡುವುದಿಲ್ಲ.
2. ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವ ವ್ಯಕ್ತಿಗಳು ಟೆಂಡರ್ ಸಲ್ಲಿಸುವ ಮೊದಲು ಇ.ಎಂ.ಡಿ. ಮೊತ್ತವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಡಿ.ಡಿ. ಮೂಲಕ ಅಥವಾ ನಗದು ಮೂಲಕ ಸಂಬಂಧಿಸಿದ ವಲಯ ಅರಣ್ಯಾಧಿಕಾರಿಯವರ ಕಛೇರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರಿನಲ್ಲಿ ಪಾವತಿಸತಕ್ಕದ್ದು. ನಿಗದಿಪಡಿಸಿರುವ ಇ.ಎಂ.ಡಿ. ಮೊತ್ತ ಈ ಕೆಳಕಂಡಂತಿದೆ.

ಅ) ಜೀಪು ಮತ್ತು ಕಾರಿಗೆ ರೂ.5,000.00 (ರೂ. ಐದು ಸಾವಿರ ಮಾತ್ರ)
ಆ) ದ್ವಿಚಕ್ರ ವಾಹನಕ್ಕೆ ರೂ.3,000.00 (ರೂ. ಮೂರು ಸಾವಿರ ಮಾತ್ರ)
ಇ) ವ್ಯಾನ್‌ಗಳಿಗೆ ರೂ.10,000.00 (ರೂ. ಹತ್ತು ಸಾವಿರ ಮಾತ್ರ)

3. ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಜಯಶೀಲರಾದ ವ್ಯಕ್ತಿಗಳು ವಾಹನ ಖರೀದಿಯ ಮೊತ್ತದ ಶೇಕಡಾ 50ರಷ್ಟು ಹಣ ಮತ್ತು ಚಾಲ್ತಿ ದರದ ಪೂರ್ಣ ತೆರಿಗೆಯನ್ನು ಹರಾಜು ಮುಗಿದ ಕೂಡಲೆ ಸಕ್ರೆಬೈಲು ವನ್ಯಜೀವಿ ವಲಯ ಅರಣ್ಯಾಧಿಕಾರಿಯವರ ಕಛೇರಿಯಲ್ಲಿ ಪಾವತಿಸತಕ್ಕದ್ದು. ಬಾಕಿ ಉಳಿದ ಮೊತ್ತವನ್ನು ಟೆಂಡರ್-ಕಂ-ಹರಾಜಿನ ಅನುಮೋದನೆಯ ಮಂಜೂರಾತಿ ಆದೇಶ ದೊರೆತ 10 (ಹತ್ತು) ದಿನಗಳ ಒಳಗಾಗಿ ಪಾವತಿಸತಕ್ಕದ್ದು.
4. ಪ್ರಕಟಿಸಿದ ವಾಹನಗಳಲ್ಲಿ ಯಾವ ವಾಹನವನ್ನಾದರೂ ಯಾವುದೇ ಕಾರಣ ನೀಡದೇ ಹರಾಜಿನಿಂದ ಕೈಬಿಟ್ಟು ಕಾಯ್ದಿರಿಸುವ ಪೂರ್ಣ ಅಧಿಕಾರ ಈ ಕೆಳ ಸಹಿದಾರರಿಗೆ ಇರುತ್ತದೆ.
5. ಪ್ರಕಟಿಸಿದ ವಾಹನಗಳಲ್ಲಿ ಯಾವುದಾದರೂ ವಾಹನಗಳನ್ನು ಇಲಾಖಾ ಉಪಯೋಗಕ್ಕೆ ಮೇಲಾಧಿಕಾರಿಯವರು ಆದೇಶ ನೀಡಿದಲ್ಲಿ ಅಂತಹ ವಾಹನಗಳನ್ನು ಟೆಂಡರ್-ಕಂ-ಹರಾಜಿನಿಂದ ಕೈ ಬಿಡಲಾಗುವುದು.
6. ಟೆಂಡರ್ ನಮೂನೆಗಳನ್ನು ನಿಗದಿತ ಬೆಲೆ ಪಾವತಿಸಿ, ಸಕ್ರೆಬೈಲು ವನ್ಯಜೀವಿ ವಲಯ ಅರಣ್ಯಾಧಿಕಾರಿಗಳವರ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.
7. ಹರಾಜು ಮುಗಿದ ನಂತರ ಹರಾಜುದಾರರ/ ಟೆಂಡರ್‌ದಾರರ ಸಮ್ಮುಖದಲ್ಲಿ ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು ತೆರೆಯಲಾಗುವುದು.
8. ಕಪ್ಪು ಪಟ್ಟಿ (Black list) ನಲ್ಲಿರುವವರು, ಅರಣ್ಯ ತಕ್ಷೀರ್‌ನಲ್ಲಿ ದಾಖಲಾದವರು, ದಿವಾಳಿಯಾದವರು, ಶ್ರೀಗಂಧ ತಕ್ಷೀರಿನಲ್ಲಿ ಶಿಕ್ಷೆಗೆ ಒಳಗಾದವರುಗಳಿಗೆ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
9. ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ಖರೀದಿ ಬಯಸುವ ಪ್ರತಿಯೊಂದು ವಾಹನಕ್ಕೂ ಪ್ರತ್ಯೇಕವಾಗಿ ಟೆಂಡರನ್ನು ಸಲ್ಲಿಸಬೇಕು. ಅದಕ್ಕೆ ನಿಗದಿಪಡಿಸಿದ ಠೇವಣಿ ಮೊತ್ತವನ್ನು ಸಲ್ಲಿಸಿ, ಸ್ವೀಕೃತಿಯ ಸಂಖ್ಯೆಯನ್ನು ಟೆಂಡರ್ ನಮೂನೆಯಲ್ಲಿ ನಮೂದಿಸಿ, ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್-ಕಂ-ಹರಾಜಿನ ನಿಗದಿಪಡಿಸಿದ ದಿನಾಂಕ ಹಾಗೂ ಸಮಯದೊಳಗೆ ವಲಯ ಅರಣ್ಯಾಧಿಕಾರಿಗಳು, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಕಛೇರಿಯಲ್ಲಿರುವ ಸ್ವೀಕೃತ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು.
10. ಟೆಂಡರ್ ಹಾಕದೇ ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಪ್ರತಿ ವ್ಯಾನ್‌ಗಳಿಗೆ ರೂ.10000.00, ಕಾರು, ಜೀಪು ವಾಹನಕ್ಕೆ 5000 ರೂ. ಹಾಗೂ ದ್ವಿಚಕ್ರ ವಾಹನಕ್ಕೆ 3000.00 ರೂ.ಗಳಂತೆ ಹರಾಜು ನಡೆಸುವ ಕಛೇರಿಯಲ್ಲಿ ಇ.ಎಂ.ಡಿ. ಒಪ್ಪಿಸಿ ಸ್ವೀಕೃತಿ ಪಡೆಯುವುದು.
11. ಜಂಟಿಯಾಗಿ ಕಟ್ಟಲು ಬಯಸುವ ಮುಂಗಡ ಠೇವಣಿಯನ್ನು ಅಂಗೀಕರಿಸುವುದಿಲ್ಲ. ಪ್ರತಿನಿಧಿಯಾಗಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗಿಂತ ಮೊದಲು ವಿಶೇಷ ಅರ್ಹತಾ ಪತ್ರವನ್ನು ಹರಾಜು ನಡೆಸುವ ಅಧಿಕಾರಿಗೆ ಒಪ್ಪಿಸಿ, ಅವರಿಂದ ಅನುಮತಿಯನ್ನು ಪಡೆದು, ನಂತರ ಹರಾಜಿನಲ್ಲಿ ಭಾಗವಹಿಸುವುದು.
12. ಸರ್ಕಾರದ ಪರವಾಗಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಮುಂಗಡ ಠೇವಣಿ ಹಣವನ್ನು ಕಟ್ಟಿ, ತಮ್ಮ ಕಛೇರಿಯ ಮುಖ್ಯಸ್ಥರಿಂದ ಪಡೆದ ಅರ್ಹತಾ ಪತ್ರದ ಪ್ರತಿಯನ್ನು ಹರಾಜು ಮಾಡುವ ಅಧಿಕಾರಿಯವರಿಗೆ ಹರಾಜಿಗಿಂತ ಮುಂಚೆ ಒಪ್ಪಿಸಿ, ಅವರ ಅನುಮತಿಯನ್ನು ಪಡೆದು, ನಂತರ ಹರಾಜಿನಲ್ಲಿ ಭಾಗವಹಿಸಬಹುದು.
13. ಸಂಘ-ಸಂಸ್ಥೆಗಳ ಪ್ರತಿನಿಧಿಯಾಗಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಸಂಬಂಧಪಟ್ಟವರಿಂದ ಪಡೆದ ವಿಶೇಷ ಅರ್ಹತಾ ಪತ್ರವನ್ನು ಹರಾಜು ಮಾಡುವ ಅಧಿಕಾರಿಯವರಿಗೆ ಹರಾಜಿಗಿಂತ ಮುಂಚೆ ಒಪ್ಪಿಸಿ, ಅವರ ಅನುಮತಿಯನ್ನು ಪಡೆದು ನಂತರ ಹರಾಜಿನಲ್ಲಿ ಭಾಗವಹಿಸಬಹುದು.
14. ಟೆಂಡರ್-ಕಂ-ಹರಾಜು ಪ್ರಕಟಣೆಯ ಪತ್ರಕ್ಕೆ ಸಹಿ ಮಾಡದಿದ್ದವರ ಅಹವಾಲನ್ನು ಅಂಗೀಕರಿಸುವುದಿಲ್ಲ.
15. ಟೆಂಡರ್-ಕಂ-ಹರಾಜನ್ನು ಯಾವುದೇ ಕಾರಣ ನೀಡದೇ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಹರಾಜು ನಡೆಸುವ ಅಧಿಕಾರಿಗೆ ಇರುತ್ತದೆ.
16. ಬಿಡ್‌ದಾರರು ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಿ, ವಾಹನವನ್ನು ಕೊಂಡು ಬಾಕಿ ಹಣವನ್ನು ಕಟ್ಟದೇ ಇದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಮರು ಹರಾಜಿನಿಂದ ಸರ್ಕಾರಕ್ಕೆ ನಷ್ಟ ಉಂಟಾಗಿದ್ದಲ್ಲಿ ಅಂತಹ ನಷ್ಟವನ್ನು ಸೆಕ್ಷನ್ 109, ಕರ್ನಾಟಕ ಅರಣ್ಯ ಕಾಯಿದೆ ಪ್ರಕಾರ ಭೂ ಕಂದಾಯ ಬಾಕಿಯಂತೆ ವಸೂಲು ಮಾಡಲಾಗುವುದು.
17. ಟೆಂಡರ್-ಕಂ-ಹರಾಜಿನಲ್ಲಿ ವಾಹನಗಳನ್ನು ಕೊಂಡವರು ವಾಹನಗಳ ಮಾಲೀಕತ್ವದ ವರ್ಗಾವಣೆಯ ಖರ್ಚು ವೆಚ್ಚಗಳನ್ನು ಅವರೇ ಭರಿಸತಕ್ಕದ್ದು.
18. ಟೆಂಡರ್-ಕಂ-ಹರಾಜು ಮಂಜೂರಾತಿಯ ಆದೇಶದ ದಿನಾಂಕದಿಂದ 15 ದಿನಗಳೊಳಗಾಗಿ ಬಿಡ್‌ದಾರರು ವಾಹನಗಳನ್ನು ತಮ್ಮ ವಶಕ್ಕೆ ಪಡೆದುಕೊಳ್ಳತಕ್ಕದ್ದು. 15 ದಿನಗಳ ನಂತರ ಮುಂದಿನ 75 ದಿನಗಳವರೆಗೆ ದಿನ ಒಂದಕ್ಕೆ 25.00 ರೂಪಾಯಿಗಳಂತೆ ನೆಲ ಬಾಡಿಗೆಯನ್ನು ಮತ್ತು ದಂಡ 500.00 ರೂಪಾಯಿಗಳನ್ನು ವಾಹನ ಒಂದಕ್ಕೆ ವಸೂಲು ಮಾಡಲಾಗುವುದು. 90 ದಿವಸಗಳಲ್ಲಿ ಖರೀದಿಸಿದ ವಾಹನವನ್ನು ಬಿಡುಗಡೆ ಪಡೆಯಲು ವಿಫಲರಾದಲ್ಲಿ ಅಂತಹ ವಾಹನಗಳನ್ನು ಮರು ಹರಾಜು ಮಾಡಲಾಗುವುದು.
19. ಬಿಡ್‌ದಾರರು ವಾಹನಗಳಿಗೆ ಅತೀ ಹೆಚ್ಚು ಹಣಕ್ಕೆ ಕೂಗಿ ಅವರ ಹೆಸರನ್ನು ಘೋಷಿಸಿದ ನಂತರ ಹರಾಜು ಚೀಟಿಗಳನ್ನು ಪರಿಶೀಲಿಸಿ, ಅದರಲ್ಲಿರುವ ಮೊಬಲಗು ಸರಿಯಾಗಿ ನಮೂದಿಸಲಾಗಿದೆ ಎಂಬುದಕ್ಕೆ ಖಚಿತ ಮಾಡಿಕೊಂಡು ತಮ್ಮ ಸಹಿ ಹಾಕುವುದು.
20. ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಘೋಷಿಸಿದ ಎರಡಾವರ್ತಿಯ ಸವಾಲನ್ನು ಇಲಾಖಾ ಮೇಲಾಧಿಕಾರಿಯವರು ಹರಾಜು ಮಂಜೂರಾತಿ ನೀಡಬೇಕಾಗಿರುತ್ತದೆ. ಅವರಿಂದ ಮಂಜೂರಾತಿ ಆದೇಶ ಬಂದ ತರುವಾಯ ಬಿಡ್‌ದಾರರಿಗೆ ತಿಳಿಸಲಾಗುವುದು. ಈ ಅವಧಿಯಲ್ಲಿ ಬಿಡ್‌ದಾರರು ತಮ್ಮ ಬಿಡ್ಡನ್ನು ಹಿಂತೆಗೆದುಕೊಳ್ಳಲು ಅವಕಾಶವಿರುವುದಿಲ್ಲ. ಎರಡಾವರ್ತಿಯ ಸವಾಲುಗಳ ಅಂಗೀಕಾರ ಅಥವಾ ಅನಂಗೀಕಾರ ಕುರಿತು ಬಿಡ್‌ದಾರರಿಗೆ ಪತ್ರ ಮುಖೇನ ತಿಳಿಸಲಾಗುವುದು.

21. ಬಿಡ್‌ದಾರರು ಕಟ್ಟಿದ ಠೇವಣಿ ಹಣದ ಮಿತಿಯೊಳಗಾಗಿ ವಾಹನವನ್ನು ಕೊಂಡಲ್ಲಿ ಪೂರ್ಣ ಹಣವನ್ನು ಲೆಕ್ಕಕ್ಕೆ ತೆಗೆದುಕೊಂಡು ಬಾಕಿ ಹಣವನ್ನು ಮಾತ್ರ ಹಿಂದಿರುಗಿಸಲಾಗುವುದು.
22. ಬಿಡ್‌ದಾರರು ವಾಹನವನ್ನು ನಿಗದಿಪಡಿಸಿದ ಅವಧಿಯಲ್ಲಿ ತೆಗೆದುಕೊಂಡು ಹೋಗದಿದ್ದ ಪಕ್ಷದಲ್ಲಿ ವಾಹನ ಹಾಳಾದರೆ, ಕಳವು ಆದರೆ ಮತ್ತಿತರೆ ಲೋಪಕ್ಕೆ ಇಲಾಖೆಯವರು ಜವಾಬ್ದಾರಿಯಾಗಿರುವುದಿಲ್ಲ.
23. ಬಿಡ್‌ದಾರರು ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಮೊತ್ತಕ್ಕೆ ಕೂಗಿ, ನಮೂದಿಸಿದ ತರುವಾಯ ತಮ್ಮ ಅಹವಾಲನ್ನು ಹಿಂತೆಗೆದುಕೊಳ್ಳಲು ಅವಕಾಶವಿರುವುದಿಲ್ಲ.
24. ಬಿಡ್‌ದಾರರು ಟೆಂಡರ್-ಕಂ-ಬಹಿರಂಗ ಹರಾಜಿನ ದಿನ ನಿಗದಿಪಡಿಸಿದ ಅವಧಿಯವರೆಗೆ ಟೆಂಡರ್ ಸ್ವೀಕರಿಸಲಾಗುವುದು. ಇದಾದ ನಂತರ ಟೆಂಡರ್‌ಗಳನ್ನು ಪರಿಶೀಲಿಸಿ, ಬಹಿರಂಗ ಹರಾಜಿನಲ್ಲಿ ಬಂದ ಸವಾಲು ಮತ್ತು ಟೆಂಡರ್‌ಗಳನ್ನು ಹೋಲಿಸಿ ನೋಡಲಾಗುವುದು. ಅವುಗಳ ಪೈಕಿ ಯಾವ ದರ ಹೆಚ್ಚಿದಿಯೋ ಅದನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.
25. ವಿಧಿಸಿದ ಷರತ್ತಿಗನುಗುಣವಾಗಿ ಬಿಡ್‌ದಾರರು ವರ್ತಿಸದಿದ್ದಲ್ಲಿ ಅಂತಹವರ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಹರಾಜು ಮಾಡುವ ಅಧಿಕಾರಿಯವರು ಪ್ರಸ್ತುತ ವಿಧಿಸಿದ ಷರತ್ತುಗಳನ್ನು ವಿಸ್ತರಿಸಿ ಅಥವಾ ಮಾರ್ಪಡಿಸಿ, ಹರಾಜಿನ ಸಮಯದಲ್ಲಿ ಪ್ರಚಾರಪಡಿಸುವ ಅಧಿಕಾರ ಹೊಂದಿರುತ್ತಾರೆ.

**ಜಿ.ಎ.ಎನ್. ಕರ್ಕೀಕರ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 148

**DEPARTMENT OF COMMERCIAL TAXES**
**FORM-I**
**Office of the Commissioner of Commercial Taxes, Karnataka Vanijya Therige Karyalaya, Gandhinagar, Bangalore-560 009**
**NOTIFICATION**

**Smt. RUKMINIYAMMA,** Working as Second Division Assistant in the Office of the Assistant commissioner of commercial Taxes, L.V.O-080, Bangalore, Department of Commercial taxes is permitted to change her name to **Smt. RUKMINI.**

Commissioner of Commercial Taxes,
Karnataka, Bangalore.

P.D. 68

**DEPARTMENT OF COMMERCIAL TAXES**
**FORM -I**
**Office of the Commissioner of Commercial Taxes, Karnataka Vanijya Therige Karyalaya, Gandhinagar, Bangalore-560 009**
**NOTIFICATION**

**Sri. M.H. MADARA,** Working as Stenographer in the office of the Assistant Commissioner of Commercial Taxes(Transition), Nippani, Department of commercial taxes is permitted to change his name to **Sri MALLIKARJUNA HUSANAPPA MATTIHAL.**

Commissioner of Commercial Taxes,
Karnataka, Bangalore.

P.D. 69

**ಆರೋಗ್ಯ ಮತ್ತು ಕು.ಕ ಸೇವೆಗಳ ನಿರ್ದೇಶನಾಲಯ ಬೆಂಗಳೂರು**
**ನಮೂನೆ-1**
**ಅಧಿಸೂಚನೆ**

ಶ್ರೀಮತಿ ಚನ್ನಮ್ಮ ಗಿರಿಯಪ್ಪ ಜೋಗಳೇಕರ ಕಿ. ಮ. ಅ. ಸ. ಪ್ರಾಥಮಿಕ ಆರೋಗ್ಯ ಕೇಂದ್ರ, ಗಳಗಿ ಹುಲಿಕೊಪ್ಪ, ಧಾರವಾಡ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿರುವ ಇವರ ಹೆಸರನ್ನು **ಶ್ರೀಮತಿ ಚನ್ನಮ್ಮ ಮಲ್ಲನ ಗೌಡ ಕಾನಿಕೇರಿ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ.70

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**POLICE DEPARTMENT**
**FORM-I**
**See Rule-9**
**NOTIFI CATION**

**Shri BUDDIVANTHA MARATI,** Working as Armed Police Constable in the Police Department of Office of District Armed Reserve Udupi is permitted to change his name to **BHARATH MARATI.**

Superintendent of Police,
Udupi District.

P.D. 71

**ರಾಜ್ಯ ಲೆಕ್ಕಪತ್ರ ಇಲಾಖೆ**
**ನಮೂನೆ-1**
**(ನಿಯಮ 9 ನೋಡಿ)**
**ಪ್ರಕಟಣೆ**

ಕಾರ್ಯಪಾಲಕ ಅಭಿಯಂತರರು, ಪಂಚಾಯತ್‌ರಾಜ್ (ಇಂ) ವಿಭಾಗ, ಹಾವೇರಿ ಇವರ ಕಛೇರಿಯಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆಗೊಂಡು ಪ್ರಥಮ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ **'ಜಿ.ಬಿ. ಗೌಡ'** ಇವರಿಗೆ ತಮ್ಮ ಹೆಸರನ್ನು **" ಜಿ.ಬಿ. ಕುಂಬಾರ"** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

ಪಿ.ಡಿ.72

ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ,
ಬೆಂಗಳೂರು.

**FORM-IV**
**(See Rule-12)**
**NOTICE**

It is hereby notified that the undersigned has changed her name from **Smt. PADMA P.L. to Smt PADMA DINESH.**

P.D. 73

**Smt. PADMA P.L.**

**FORM-IV**
**(See Rule-12)**
**NOTICE**

It is hereby notified that the undersigned has changed his name from **N. MUNIYA to N. SURESH YADAV.**

P.D. 74

**N. MUNIYA.**

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560001**
**ತಿದ್ದುಪಡಿ**
**ಸಂಖ್ಯೆ: ಇ(1)/ 1941/ 2005-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2006**

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: ಇ(1) 1345/ 2005-06/ ಪಿಎಸ್‌ಸಿ ದಿನಾಂಕ: 07.11.2005, ಸರ್ಕಾರದ ಸಚಿವಾಲಯದಲ್ಲಿ ಖಾಲಿ ಇರುವ ಶಾಖಾಧಿಕಾರಿಗಳ (ಸೇವಾ ನಿರತ) ಹುದ್ದೆಗಳ ನೇಮಕಾತಿ ಬಗ್ಗೆ.

ಉಲ್ಲೇಖಿತ ಅಧಿಸೂಚನೆಯ ಕಂಡಿಕೆ -1 'ಅ' ನಲ್ಲಿ "ಅರ್ಜಿ ಸಲ್ಲಿಸಲು ಬಯಸುವ ಅಭ್ಯರ್ಥಿಗಳು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಸೇವಾ ನಿರತರಾಗಿದ್ದು ಐದು ವರ್ಷಗಳನ್ನು (ಸೇವಾ ಪೂರ್ವ ಅವಧಿ [Probationary Period] ಬಿಟ್ಟು) ಯನ್ನು ಪೂರೈಸಬೇಕು" ಎಂದು ಪ್ರಕಟಿಸಲ್ಪಟ್ಟಿದ್ದು. ಇದರ ಬದಲಾಗಿ "ಅರ್ಜಿ ಸಲ್ಲಿಸಲು ಬಯಸುವ ಅಭ್ಯರ್ಥಿಗಳು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಸೇವಾ ನಿರತರಾಗಿದ್ದು ಐದು ವರ್ಷಗಳನ್ನು (ಸೇವಾ ಪೂರ್ವ ಅವಧಿ [Probationary Period] ಬಿಟ್ಟು ಮತ್ತು ಸ್ಥಾನಪನ್ನ ಅವಧಿಯನ್ನು ಹೊರತುಪಡಿಸಿ) ಪೂರೈಸಿರಬೇಕು" ಎಂದು ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು-560001.

ಪಿ.ಆರ್.150

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗಸೌಧ, ಬೆಂಗಳೂರು-560001**
**ತಿದ್ದುಪಡಿ**
**ಸಂಖ್ಯೆ: Conf / 25/ ಪಿಎಸ್‌ಸಿ/ 2005-06, ಬೆಂಗಳೂರು, ದಿನಾಂಕ:10ನೇ ಮಾರ್ಚ್, 2006**

**ಉಲ್ಲೇಖ:** ಅಧಿಸೂಚನೆ ಸಂಖ್ಯೆ:Conf.25/2005-06/ PSC, ದಿನಾಂಕ: 28.02.2006.

ಉಲ್ಲೇಖಿತ ಅಧಿಸೂಚನೆಯಲ್ಲಿ 1998ರ ಗೆಜೆಟೆಡ್ ಪ್ರೊಬೆಷನರ್ಸ್ 'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದ್ದು, ಇದರಲ್ಲಿ ಪುಟ ಸಂಖ್ಯೆ 17ರಲ್ಲಿನ ಹುದ್ದೆಯ ಹೆಸರನ್ನು "Administrative Labour Officer``ಗೆ ಬದಲಾಗಿ "Labour Officer" ಎಂದು ಓದಿಕೊಳ್ಳಬೇಕು.

ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು-560001.

ಪಿ.ಆರ್.151

**ಕಾವೇರಿ ನೀರಾವರಿ ನಿಗಮ ನಿಯಮಿತ**
**(ಕರ್ನಾಟಕ ಸರ್ಕಾರದ ಉದ್ಯಮ)**
**ಎಕ್ಸಿಕ್ಯುಟಿವ್ ಇಂಜಿನಿಯರ್ ರವರ ಕಛೇರಿ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ**
**ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: 31/ 2005-06, ದಿನಾಂಕ:10ನೇ ಮಾರ್ಚ್, 2006**
**(ಮ್ಯಾನ್ಯುಯಲ್ ಅಥವಾ ಎಲೆಕ್ಟ್ರಾನಿಕ್ ಟೆಂಡರಿಂಗ್)**

ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರು ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಇದೇ ನಮೂನೆಯ ಕೆಲಸವನ್ನು ನಿರ್ವಹಿಸಿರುವ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿ ಕಾವೇರಿ ನೀರಾವರಿ ನಿಗಮ ನಿಯಮಿತದಲ್ಲಿ ಹೆಸರನ್ನು ದಾಖಲಿಸಿರುವ ಕಾಲಂ ನಂ.7ರಲ್ಲಿ ಸೂಚಿಸಿರುವ ದರ್ಜೆಯ ಗುತ್ತಿಗೆದಾರರಿಂದ ಐಟಂವಾರು ಟೆಂಡರ್‌ಗಳನ್ನು ಇ-ಟೆಂಡರಿಂಗ್ ಅಥವಾ ಮ್ಯಾನ್ಯುಯಲ್ ಟೆಂಡರಿಂಗ್ ಮೂಲಕ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಇವರ ಪರವಾಗಿ ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ ಲಕ್ಷ ರೂಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ದ್ವಿಪ್ರತಿಯಲ್ಲಿರುವ ಖಾಲಿ ಟೆಂಡರ್ ಫಾರಂ ಬೆಲೆ ತೆರಿಗೆಗಳು ಪ್ರತ್ಯೇಕ | ಕೆಲಸ ಪೂರ್ಣಗೊಳಿಸಲು ಕಾಲಮಿತಿ (ಮಳೆಗಾಲ ಹೊರತುಪಡಿಸಿ) | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಹನುಮನಹಳ್ಳಿ ಪುನರ್ವಸತಿ ಗ್ರಾಮದ ರಸ್ತೆ ಮತ್ತು ಚರಂಡಿ ಅಭಿವೃದ್ಧಿಯ ಕಾಮಗಾರಿ. | 15.00 | 22500/- | 3000.00 | 3 (ಮೂರು) ತಿಂಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 2. | ಹಂಗರಹಳ್ಳಿ ಪುನರ್ವಸತಿ ಗ್ರಾಮದ ರಸ್ತೆ ಮತ್ತು ಚರಂಡಿ ಅಭಿವೃದ್ಧಿಯ ಕಾಮಗಾರಿ. | 20.00 | 30000/- | 3000.00 | 3 (ಮೂರು) ತಿಂಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 3. | ಹೇಮಾವತಿ ಎಡದಂಡೆ ನಾಲೆಯ 8ಎ ಉಪನಾಲೆಯ 1ನೇ ಕಿ.ಮೀ. ನಲ್ಲಿ ಕವರ್‌ಡಕ್ಟ್ ನಿರ್ಮಾಣ. | 12.00 | 18000/- | 2000.00 | 3 (ಮೂರು) ತಿಂಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 4. | ಆಲೂರು ತಾ ಗದ್ದೆಕೊಪ್ಪಲಿನಿಂದ ಸಿದ್ದಾಪುರದ ವರೆಗಿನ ರಸ್ತೆಗೆ ಕಿ.ಮೀ. 4ರವರೆಗೆ ಡಾಂಬರೀಕರಣ ಒದಗಿಸುವ ಕೆಲಸ. | 21.00 | 21000/- | 3000.00 | 6 (ಆರು) ತಿಂಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 5. | ಹೇಮಾವತಿ ಎಡದಂಡೆ ನಾಲೆಯ ಸರಪಳಿ 2000 ಮೀ ನಿಂದ 2275 ಮೀ ವರೆಗೆ ಮತ್ತು 2700 ಮೀ ನಿಂದ 2800 ಮೀ.ವರೆಗೆ ನಾಲಾ ತಳವನ್ನು ಅಭಿವೃದ್ಧಿಪಡಿಸುವ ಕೆಲಸ. | 15.00 | 22500/- | 3000.00 | 6 (ಆರು) ತಿಂಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು |

1. ಇ-ಟೆಂಡರಿಂಗ್‌ಗೆ ತರಬೇತಿಯನ್ನು ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರ ಕಛೇರಿಯಲ್ಲಿ ದಿನಾಂಕ: 23.03.2006ರಂದು ಬೆಳಿಗ್ಗೆ 11.30 ಗಂಟೆಗೆ ಅಪೇಕ್ಷಿತ ಅರ್ಜಿದಾರರಿಗೆ ನೀಡಲಾಗುವುದು.

2. ಖಾಲಿ ಟೆಂಡರ್ ಫಾರಂಗಳಿಗೆ ಗುತ್ತಿಗೆದಾರರು ಅರ್ಜಿ ಸಲ್ಲಿಸುವ ದಿನಾಂಕ: 24.03.2006.

3. ಖಾಲಿ ಟೆಂಡರ್ ಫಾರಂ ನೀಡುವ ದಿನಾಂಕ: 29.03.2006.

4. ಭರ್ತಿಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 31.03.2006.

5. ಹೆಚ್ಚಿನ ವಿವರಗಳಿಗಾಗಿ ಈ ಕಛೇರಿಯ ರಜಾ ದಿನ ಹೊರತುಪಡಿಸಿ ಬೆಳಿಗ್ಗೆ 10 ಗಂಟೆಯಿಂದ 5.30ರ ವರೆಗೆ ಸಂಪರ್ಕಿಸಿ ಮಾಹಿತಿ ಪಡೆಯುವುದು.

ಎಕ್ಸಿಕ್ಯುಟಿವ್ ಇಂಜಿನಿಯರ್,
ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು.

ಪಿ.ಡಿ. 35

## ಕಾವೇರಿ ನೀರಾವರಿ ನಿಗಮ ನಿಯಮಿತ
## (ಕರ್ನಾಟಕ ಸರ್ಕಾರದ ಉದ್ಯಮ)
## ಎಕ್ಸಿಕ್ಯುಟಿವ್ ಇಂಜಿನಿಯರ್ ರವರ ಕಛೇರಿ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ
## ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: 34/ 2005-06, ದಿನಾಂಕ:10ನೇ ಮಾರ್ಚ್, 2006
## (ದ್ವಿಲಕೋಟೆ ಪದ್ಧತಿ ಮ್ಯಾನ್ಯುಯಲ್ ಅಥವಾ ಎಲೆಕ್ಟ್ರಾನಿಕ್ ಟೆಂಡರಿಂಗ್)

ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರು ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಇದೇ ನಮೂನೆಯ ಕೆಲಸವನ್ನು ನಿರ್ವಹಿಸಿರುವ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿ ಕಾವೇರಿ ನೀರಾವರಿ ನಿಗಮ ನಿಯಮಿತದಲ್ಲಿ ಹೆಸರನ್ನು ದಾಖಲಿಸಿರುವ ಕಾಲಂ ನಂ.7ರಲ್ಲಿ ಸೂಚಿಸಿರುವ ದರ್ಜೆಯ ಗುತ್ತಿಗೆದಾರರಿಂದ ಐಟಂವಾರು ಟೆಂಡರ್‌ಗಳನ್ನು ಇ-ಟೆಂಡರಿಂಗ್ ಅಥವಾ ಮ್ಯಾನ್ಯುಯಲ್ ಟೆಂಡರಿಂಗ್ ಮೂಲಕ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಇವರ ಪರವಾಗಿ ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ ಲಕ್ಷ ರೂಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ದ್ವಿಪ್ರತಿಯಲ್ಲಿರುವ ಖಾಲಿ ಟೆಂಡರ್ ಫಾರಂ ಬೆಲೆ ತೆರಿಗೆಗಳು ಪ್ರತ್ಯೇಕ | ಕೆಲಸ ಪೂರ್ಣಗೊಳಿಸಲು ಕಾಲಮಿತಿ (ಮಳೆಗಾಲ ಹೊರತುಪಡಿಸಿ) | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಹೇಮಾವತಿ ಅಣೆಕಟ್ಟೆಯ ಬಲದಂಡೆ ಭಾಗದಲ್ಲಿ ರಕ್ಷಣಾ ಗೋಡೆ ವಿಸ್ತರಣಾ ಕಾಮಗಾರಿ. | 75.00 | 75000/- | 7500.00 | 6 (ಆರು) ತಿಂಗಳು | 1ನೇ ದರ್ಜೆ ಮತ್ತು ಮೇಲ್ಪಟ್ಟು |

1. ಇ-ಟೆಂಡರಿಂಗ್‌ಗೆ ತರಬೇತಿಯನ್ನು ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರ ಕಛೇರಿಯಲ್ಲಿ ದಿನಾಂಕ: 23.03.2006ರಂದು ಬೆಳಿಗ್ಗೆ 11.30 ಗಂಟೆಗೆ ಅಪೇಕ್ಷಿತ ಅರ್ಜಿದಾರರಿಗೆ ನೀಡಲಾಗುವುದು.

2. ಖಾಲಿ ಟೆಂಡರ್ ಫಾರಂಗಳಿಗೆ ಗುತ್ತಿಗೆದಾರರು ಅರ್ಜಿ ಸಲ್ಲಿಸುವ ದಿನಾಂಕ: 27.03.2006.

3. ಖಾಲಿ ಟೆಂಡರ್ ಫಾರಂ ನೀಡುವ ದಿನಾಂಕ: 29.03.2006.

4. ಭರ್ತಿಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 31.03.2006.

5. ಹೆಚ್ಚಿನ ವಿವರಗಳಿಗಾಗಿ ಈ ಕಛೇರಿಯ ರಜಾ ದಿನ ಹೊರತುಪಡಿಸಿ ಬೆಳಿಗ್ಗೆ 10 ಗಂಟೆಯಿಂದ 5.30ರ ವರೆಗೆ ಸಂಪರ್ಕಿಸಿ ಮಾಹಿತಿ ಪಡೆಯುವುದು.

ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ
ಅಣೆಕಟ್ಟು ವಿಭಾಗ, ಗೊರೂರು.

ಪಿ.ಡಿ. 36

## ಕಾವೇರಿ ನೀರಾವರಿ ನಿಗಮ ನಿಯಮಿತ
## (ಕರ್ನಾಟಕ ಸರ್ಕಾರದ ಉದ್ಯಮ)
## ಎಕ್ಸಿಕ್ಯುಟಿವ್ ಇಂಜಿನಿಯರ್ ರವರ ಕಛೇರಿ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ
## ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: 35/ 2005-06, ದಿನಾಂಕ:10ನೇ ಮಾರ್ಚ್, 2006
## (ಮ್ಯಾನ್ಯುಯಲ್ ಅಥವಾ ಎಲೆಕ್ಟ್ರಾನಿಕ್ ಟೆಂಡರಿಂಗ್)

ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರು ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಇದೇ ನಮೂನೆಯ ಕೆಲಸವನ್ನು ನಿರ್ವಹಿಸಿರುವ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿ ಕಾವೇರಿ ನೀರಾವರಿ ನಿಗಮ ನಿಯಮಿತದಲ್ಲಿ ಹೆಸರನ್ನು ದಾಖಲಿಸಿರುವ ಕಾಲಂ ನಂ.7ರಲ್ಲಿ ಸೂಚಿಸಿರುವ ದರ್ಜೆಯ ಗುತ್ತಿಗೆದಾರರಿಂದ ಐಟಂವಾರು ಟೆಂಡರ್‌ಗಳನ್ನು ಇ-ಟೆಂಡರಿಂಗ್ ಅಥವಾ ಮ್ಯಾನ್ಯುಯಲ್ ಟೆಂಡರಿಂಗ್ ಮೂಲಕ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಇವರ ಪರವಾಗಿ ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ ಲಕ್ಷ ರೂಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ದ್ವಿಪ್ರತಿಯಲ್ಲಿರುವ ಖಾಲಿ ಟೆಂಡರ್ ಫಾರಂ ಬೆಲೆ ತೆರಿಗೆಗಳು ಪ್ರತ್ಯೇಕ | ಕೆಲಸ ಪೂರ್ಣಗೊಳಿಸಲು ಕಾಲಮಿತಿ (ಮಳೆಗಾಲ ಹೊರತುಪಡಿಸಿ) | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಹೇಮಾವತಿ ಅಣೆಕಟ್ಟೆ ಎಡದಂಡೆ ಮತ್ತು ಬಲದಂಡೆ ನಾಲೆಯ ಮುಖ್ಯ ತೂಬುಗಳಿಗೆ ಎಪಾಕ್ಸಿ ಬಣ್ಣ ಬಳಿಯುವ ಕಾಮಗಾರಿ. | 25.00 | 25000/- | 3000.00 | 3 (ಮೂರು ತಿಂಗಳು) | 1ನೇ ದರ್ಜೆ ಮತ್ತು ಹೆಸರಾಂತ ಸಂಸ್ಥೆ. |
| 2. | ಹೇಮಾವತಿ ಅಣೆಕಟ್ಟೆ ಎಡದಂಡೆ ಮತ್ತು ಬಲದಂಡೆ ನಾಲೆಯ ಮುಖ್ಯ ತೂಬುಗಳ ಗೇಟುಗಳ ರೋಲರ್‌ಗಳನ್ನು ಬದಲಾಯಿಸುವುದು ಮತ್ತು ರಿಪೇರಿ ಕೆಲಸ. | 30.50 | 30500/- | 3000.00 | 3 (ಮೂರು ತಿಂಗಳು) | 1ನೇ ದರ್ಜೆ ಮತ್ತು ಹೆಸರಾಂತ ಸಂಸ್ಥೆ. |

1. ಇ-ಟೆಂಡರಿಂಗ್‌ಗೆ ತರಬೇತಿಯನ್ನು ಎಕ್ಸಿಕ್ಯುಟಿವ್ ಇಂಜಿನಿಯರ್, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರ ಕಛೇರಿಯಲ್ಲಿ ದಿನಾಂಕ: 23.03.2006ರಂದು ಬೆಳಿಗ್ಗೆ 11.30 ಗಂಟೆಗೆ ಅಪೇಕ್ಷಿತ ಅರ್ಜಿದಾರರಿಗೆ ನೀಡಲಾಗುವುದು.

2. ಖಾಲಿ ಟೆಂಡರ್ ಫಾರಂಗಳಿಗೆ ಗುತ್ತಿಗೆದಾರರು ಅರ್ಜಿ ಸಲ್ಲಿಸುವ ದಿನಾಂಕ: 27.03.2006.

3. ಖಾಲಿ ಟೆಂಡರ್ ಫಾರಂ ನೀಡುವ ದಿನಾಂಕ: 29.03.2006.

4. ಭರ್ತಿಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 31.03.2006.

5. ಹೆಚ್ಚಿನ ವಿವರಗಳಿಗಾಗಿ ಈ ಕಛೇರಿಯ ರಜಾ ದಿನ ಹೊರತುಪಡಿಸಿ ಬೆಳಿಗ್ಗೆ 10 ಗಂಟೆಯಿಂದ 5.30ರ ವರೆಗೆ ಸಂಪರ್ಕಿಸಿ ಮಾಹಿತಿ ಪಡೆಯುವುದು.

ಎಕ್ಸಿಕ್ಯುಟಿವ್ ಇಂಜಿನಿಯರ್,
ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು.

ಪಿ.ಡಿ. 37

## ಕಾವೇರಿ ನೀರಾವರಿ ನಿಗಮ ನಿಯಮಿತ
## (ಕರ್ನಾಟಕ ಸರ್ಕಾರದ ಉದ್ಯಮ)
## ಎಕ್ಸಿಕ್ಯುಟಿವ್ ಇಂಜಿನಿಯರ್ ರವರ ಕಛೇರಿ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ
## ಟೆಂಡರ್ ಪ್ರಕಟಣೆ ಸಂಖ್ಯೆ: 33/ 2005-06, ದಿನಾಂಕ:10ನೇ ಮಾರ್ಚ್, 2006

ಈ ಕೆಳಗೆ ನಮೂದಿಸಿರುವ ಕೆಲಸಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ಹಾಗೂ ಕಾವೇರಿ ನೀರಾವರಿ ನಿಗಮ ನಿ.,ದಲ್ಲಿ ನೋಂದಾಯಿತ ಸೂಚಿತ ದರ್ಜೆ ಗುತ್ತಿಗೆದಾರರಿಂದ ಮಾತ್ರ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರ

ಪರವಾಗಿ ನಿಗದಿತ ಫಾರಂಗಳಲ್ಲಿ ದ್ವಿಪ್ರತಿಯಲ್ಲಿ ಈ ಕೆಳಕಂಡ ಕೆಲಸಗಳ ಮೇಲ್ಬರಹವಿರುವ ಮೊಹರಾದ ಲಕೋಟೆಯಲ್ಲಿ ಐಟಂವಾರು ಟೆಂಡರ್ ಕರೆಯಲಾಗಿದೆ.

ಈ ಕೆಲಸಗಳಿಗೆ ಬಂದ ಟೆಂಡರ್‌ಗಳನ್ನು ಎಕ್ಸಿಕ್ಯೂಟಿವ್ ಇಂಜಿನಿಯರ್, ಕಾವೇರಿ ನೀರಾವರಿ ನಿಗಮ ನಿಯಮಿತ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರು ತಮ್ಮ ಕಛೇರಿಯಲ್ಲಿ ದಿನಾಂಕ: 31.03.2006ರಂದು ಸಂಜೆ 4.00 ಗಂಟೆಯವರೆಗೆ ಭರ್ತಿಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುತ್ತಾರೆ. ಟೆಂಡರ್‌ಗಳನ್ನು ಸಾಧ್ಯವಾದರೆ ಅದೇ ದಿನ ಸಂಜೆ 4.00 ಗಂಟೆಯ ನಂತರ ಅಥವಾ ಮುಂದೆ ಸೂಚಿಸಲ್ಪಟ್ಟ ದಿನದಲ್ಲಿ ಹಾಜರಾಗಲು ಇಚ್ಛಿಸುವ ಗುತ್ತಿಗೆದಾರರು ಅಥವಾ ಅಧಿಕೃತ ಏಜೆಂಟರ ಸಮ್ಮುಖದಲ್ಲಿ ತೆರೆಯಲಾಗುವುದು.

1. ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸುವ ದಿನಾಂಕ 24.03.2006.

2. ವಿಭಾಗ ಕಛೇರಿಯಿಂದ ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಫಾರಂ ನೀಡುವ ದಿನಾಂಕ 29.03.2006.

3. ಭರ್ತಿ ಮಾಡಿದ ಟೆಂಡರ್‌ಗಳನ್ನು ಗುತ್ತಿಗೆದಾರರಿಂದ ಸ್ವೀಕರಿಸುವ ದಿನಾಂಕ 31.03.2006 ಸಂಜೆ 4 ಗಂಟೆಯವರೆಗೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ (ಲಕ್ಷ ರೂಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ದ್ವಿಪ್ರತಿಯಲ್ಲಿರುವ ಖಾಲಿ ಟೆಂಡರ್ ಫಾರಂ ಬೆಲೆ ತೆರಿಗೆಗಳು ಪ್ರತ್ಯೇಕ (ಹಿಂದಿರುಗಿಸಲಾಗದ) ರೂಗಳಲ್ಲಿ | ಕೆಲಸ ಪೂರ್ಣಗೊಳಿಸಲು ಕಾಲಮಿತಿ (ಮಳೆಗಾಲ ಹೊರತುಪಡಿಸಿ) | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಹರಳಹಳ್ಳಿ ಪುನರ್ವಸತಿ ಗ್ರಾಮದ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ. | 10.00 | 20000/- | 1500.00 | 3 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 2. | ಹನುಮನಹಳ್ಳಿ ಪುನರ್ವಸತಿ ಗ್ರಾಮಕ್ಕೆ ದೇವಸ್ಥಾನ ನಿರ್ಮಾಣ ಕಾಮಗಾರಿ. | 10.00 | 20000/- | 1500.00 | 3 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 3. | ಹೇಮಾವತಿ ಎಡದಂಡೆ ನಾಲೆಯ 8ಎ ಉಪನಾಲೆಯ ಲೈನಿಂಗ್ ಕಾಮಗಾರಿ ಮತ್ತು ಕೊಳವೆ ತೂಬು ಹಾಗೂ ಕೊಳವೆ ಮೋರಿಗಳ ದುರಸ್ಥಿ. | 10.00 | 20000/- | 1500.00 | 3 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 4. | ಹೇಮಾವತಿ ಎಡದಂಡೆ ನಾಲೆಯ 6ನೆ ಉಪನಾಲೆಯ ಲೈನಿಂಗ್ ಕಾಮಗಾರಿ ಮತ್ತು ಕೊಳವೆ ತೂಬು ಆಯ್ದ ಭಾಗಗಳಲ್ಲಿ ಏರಿ ಎತ್ತರಿಸುವ ಕೆಲಸ. | 10.00 | 20000/- | 1500.00 | 3 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 5. | ಹೇಮಾವತಿ ಎಡದಂಡೆ ನಾಲೆಯ 7 ಮತ್ತು 7ಎ ಉಪನಾಲೆಯ ಲೈನಿಂಗ್ ಕಾಮಗಾರಿ ಮತ್ತು ಕೊಳವೆ ತೂಬು ಆಯ್ದ ಭಾಗಗಳಲ್ಲಿ ಏರಿ ಎತ್ತರಿಸುವ ಕೆಲಸ. | 8.00 | 16000/- | 1500.00 | 3 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |

**ಸೂಚನೆಗಳು:**

1. ಟೆಂಡರ್‌ಗಳು ನಿಯಮಿತ ಫಾರಂ ನಲ್ಲಿರಬೇಕು. ಅವುಗಳನ್ನು ಎಕ್ಸಿಕ್ಯೂಟಿವ್ ಇಂಜಿನಿಯರ್ ಕಾ.ನೀ.ನಿ.ನಿ. ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ ಇವರಿಗೆ ಹಿಂದಿರುಗಿಸಲಾಗದ ಮೊತ್ತವನ್ನು ನಗದಾಗಿ ಅಥವಾ ಮನಿಆರ್ಡರ್ ಮೂಲಕ ನಿಯಮಿತ ದಿನಾಂಕದೊಳಗೆ ಪಾವತಿ ಮಾಡಿ ಪಡೆಯಬಹುದು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಟೆಂಡರ್‌ಗಳನ್ನು ಅಂಚೆ ಮೂಲಕ ಕಳಿಸಬೇಕಾದಲ್ಲಿ ಪ್ರತಿಸೆಟ್ಟಿಗೆ ರೂ.100-00 ಹೆಚ್ಚಿನ ಮೊತ್ತವನ್ನು ಇತರೆ ಸಾದಿಲ್ವಾರು ವೆಚ್ಚಗಳನ್ನು ಭರಿಸಲೋಸುಗ ನಗದು ಮನಿಆರ್ಡ್‌ರ್ ಮೂಲಕ ಕಳಿಸತಕ್ಕದ್ದು. ಅಂಚೆ ರವಾನೆಯಲ್ಲಿ ಆಗಬಹುದಾದ ವಿಳಂಬಕ್ಕೆ ಜವಾಬ್ದಾರಿಯನ್ನು ವಹಿಸಿಕೊಳ್ಳಲಾಗುವುದಿಲ್ಲ.

2. ವಿವರವಾದ ತಪಶೀಲುಗಳು, ನಕಾಶೆ ಹಾಗೂ ಅಂದಾಜು ಪಟ್ಟಿ ಮತ್ತು ಇತರೆ ವಿವರಗಳನ್ನು ಗುತ್ತಿಗೆದಾರರು ಕೆಳಕಂಡ ಕಛೇರಿಯಲ್ಲಿ ಟೆಂಡರ್‌ಫಾರಂ ನೀಡಿಕೆಯ ಎಲ್ಲಾ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

3. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಅಂಗೀಕರಿಸುವ/ ನಿರಾಕರಿಸುವ ಹಕ್ಕನ್ನು ಸಂಬಂಧಪಟ್ಟ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ ಮತ್ತು ಟೆಂಡರ್‌ದಾರರು ಇದಕ್ಕೆ ಬದ್ಧರಾಗಿರುತ್ತಾರೆ. ರಜಾ ದಿನಗಳು ಮತ್ತು ಭಾನುವಾರ ಬಿಟ್ಟು ಬೆಳಿಗ್ಗೆ 10 ರಿಂದ ಸಂಜೆ 5.30ರ ವರೆಗೆ ಹೆಚ್ಚಿನ ವಿವರಗಳಿಗೆ ವಿಚಾರಿಸತಕ್ಕದ್ದು.

4. ಟೆಂಡರ್ ಜೊತೆಯಲ್ಲಿ ರಿಜಿಸ್ಟ್ರೇಶನ್ ಸರ್ಟಿಫಿಕೇಟ್ ಲಗತ್ತಿಸಿರಬೇಕು ಹಾಗೂ ಟೆಂಡರ್‌ಗೆ ಅರ್ಜಿ ಸಲ್ಲಿಸುವಾಗ ಮತ್ತು ಖಾಲಿ ಟೆಂಡರ್‌ಫಾರಂ ಪಡೆಯುವಾಗ ಗುತ್ತಿಗೆದಾರರು ಕಡ್ಡಾಯವಾಗಿ ನೋಂದಣಿ ಪಾಸ್‌ಬುಕ್ ತರತಕ್ಕದ್ದು.

5. ಖಾಲಿ ಟೆಂಡರ್‌ಫಾರಂ ಪಡೆದ ನಂತರ ಗುತ್ತಿಗೆದಾರರು ತಪ್ಪದೆ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು, ಇಲ್ಲದಿದ್ದರೆ ಅಂತಹ ಗುತ್ತಿಗೆದಾರರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳಲಾಗುವುದು.

6. ನಿಗದಿತ ವೇಳೆಯಲ್ಲಿ ಸಲ್ಲಿಸದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.

7. ಮೇಲ್ಕಂಡ ಯಾವುದಾದರೂ ದಿನಗಳು ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವೆಂದು ಪರಿಗಣಿಸುವುದು.

8. ನಿಗದಿತ ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ನಗದೀಕರಿಸಲ್ಪಡುವಂತೆ ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್. ಅನ್ನು ಎಕ್ಸಿಕ್ಯುಟಿವ್ ಇಂಜಿನಿಯರ್, ಕಾ.ನೀ.ನಿ.ನಿ., ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಗೂ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್‌ಗಳನ್ನು ಕೆಳಗೆ ಸಹಿ ಮಾಡಿರುವವರ ಹೆಸರಿನಲ್ಲಿ ಅಡವಿಟ್ಟು ಸಲ್ಲಿಸತಕ್ಕದ್ದು. ಸಲ್ಲಿಸಿದ ಇ.ಎಂ.ಡಿ. ವ್ಯಾಲಿಡಿಟಿ ಅವಧಿಯು ಟೆಂಡರ್ ತೆರೆದ ದಿನಾಂಕದಿಂದ 90 ದಿನಗಳ ವರೆಗೆ ಚಾಲ್ತಿಯಲ್ಲಿರಬೇಕು. ಕಾರಣಾಂತರಗಳಿಂದ ಹೆಚ್ಚು ಅವಧಿ ಕಂಡುಬಂದರೆ ಗುತ್ತಿಗೆದಾರರು ಹೆಚ್ಚಿನ ಅವಧಿಯನ್ನು ವಿಸ್ತರಿಸಲು ಸಿದ್ಧರಿರಬೇಕಾಗಿರುತ್ತದೆ.

ಎಕ್ಸಿಕ್ಯುಟಿವ್ ಇಂಜಿನಿಯರ್,
ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು.

ಪಿ.ಡಿ. 38

## ಕಾವೇರಿ ನೀರಾವರಿ ನಿಗಮ ನಿಯಮಿತ

## (ಕರ್ನಾಟಕ ಸರ್ಕಾರದ ಉದ್ಯಮ)

## ಎಕ್ಸಿಕ್ಯುಟಿವ್ ಇಂಜಿನಿಯರ್ ರವರ ಕಛೇರಿ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ

## ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: 29/ 2005-06, ದಿನಾಂಕ:9ನೇ ಮಾರ್ಚ್, 2006

ಈ ಕೆಳಗೆ ನಮೂದಿಸಿರುವ ಕೆಲಸಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ಹಾಗೂ ಕಾವೇರಿ ನೀರಾವರಿ ನಿಗಮ ನಿ.,ದಲ್ಲಿ ನೋಂದಾಯಿತ ಸೂಚಿತ ದರ್ಜೆ ಗುತ್ತಿಗೆದಾರರಿಂದ ಮಾತ್ರ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು, ಇವರ ಪರವಾಗಿ ನಿಗದಿತ ಫಾರಂಗಳಲ್ಲಿ ದ್ವಿಪ್ರತಿಯಲ್ಲಿ ಈ ಕೆಳಕಂಡ ಕೆಲಸಗಳ ಮೇಲ್ಬರಹವಿರುವ ಮೊಹರಾದ ಲಕೋಟೆಯಲ್ಲಿ ಐಟಂವಾರು ಟೆಂಡರ್ ಕರೆಯಲಾಗಿದೆ.

ಈ ಕೆಲಸಗಳಿಗೆ ಬಂದ ಟೆಂಡರ್‌ಗಳನ್ನು ಎಕ್ಸಿಕ್ಯೂಟಿವ್ ಇಂಜಿನಿಯರ್, ಕಾವೇರಿ ನೀರಾವರಿ ನಿಗಮ ನಿಯಮಿತ, ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಇವರು ತಮ್ಮ ಕಛೇರಿಯಲ್ಲಿ ದಿನಾಂಕ: 28.03.2006ರಂದು ಸಂಜೆ 4.00 ಗಂಟೆಯವರೆಗೆ ಭರ್ತಿಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುತ್ತಾರೆ. ಟೆಂಡರ್‌ಗಳನ್ನು ಸಾಧ್ಯವಾದರೆ ಅದೇ ದಿನ ಸಂಜೆ 4.00 ಗಂಟೆಯ ನಂತರ ಅಥವಾ ಮುಂದೆ ಸೂಚಿಸಲ್ಪಟ್ಟ ದಿನದಲ್ಲಿ ಹಾಜರಾಗಲು ಇಚ್ಛಿಸುವ ಗುತ್ತಿಗೆದಾರರು ಅಥವಾ ಅಧಿಕೃತ ಏಜೆಂಟರ ಸಮ್ಮುಖದಲ್ಲಿ ತೆರೆಯಲಾಗುವುದು.

1. ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸುವ ದಿನಾಂಕ 23.03.2006.
2. ವಿಭಾಗ ಕಛೇರಿಯಿಂದ ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಫಾರಂ ನೀಡುವ ದಿನಾಂಕ 25.03.2006.
3. ಭರ್ತಿ ಮಾಡಿದ ಟೆಂಡರ್‌ಗಳನ್ನು ಗುತ್ತಿಗೆದಾರರಿಂದ ಸ್ವೀಕರಿಸುವ ದಿನಾಂಕ 28.03.2006 ಸಂಜೆ 4 ಗಂಟೆಯವರೆಗೆ.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ (ಲಕ್ಷ ರೂಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ದ್ವಿಪ್ರತಿಯಲ್ಲಿರುವ ಖಾಲಿ ಟೆಂಡರ್ ಫಾರಂ ಬೆಲೆ ತೆರಿಗೆಗಳು ಪ್ರತ್ಯೇಕ (ಹಿಂದಿರುಗಿಸಲಾಗದ) ರೂಗಳಲ್ಲಿ | ಕೆಲಸ ಪೂರ್ಣಗೊಳಿಸಲು ಕಾಲಮಿತಿ (ಮಳೆಗಾಲ ಹೊರತುಪಡಿಸಿ) | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಆಲೂರು ತಾ: ಕೆ.ಹೆಚ್. ರಸ್ತೆಯಿಂದ ಹೊನ್ನವಳ್ಳಿ ಪು:ಕಾಲೋನಿಗೆ ಡಾಂಬರೀಕರಣ 2 ಕಿ.ಮೀ. | 10.00 | 20000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 2. | ಆಲೂರು ತಾ: ತಟ್ಟೆಕೆರೆ ರಸ್ತೆಯಿಂದ ಹನುಮನಹಳ್ಳಿ ಸಂಪರ್ಕ ರಸ್ತೆಗೆ ಜಲ್ಲಿ ಹೊದಿಸುವುದು 3 ಕಿ.ಮೀ. | 8.00 | 16000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 3. | ಗೊರೂರು ವಸಾಹತುವಿನಲ್ಲಿರುವ ಸೆಮಿನಾರ್ ಹಾಲ್ ಕಟ್ಟಡಕ್ಕೆ ಕುಡಿಯುವ ನೀರು ಹಾಗೂ ನೈರ್ಮಲೀಕರಣ ವ್ಯವಸ್ಥೆಯನ್ನು ಕಲ್ಪಿಸುವ ಕಾಮಗಾರಿ. | 7.50 | 15000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 4. | ಹಾಸನ ತಾ: ಜಿ.ಎಂ. ರಸ್ತೆಯಿಂದ ದೇವಿಹಳ್ಳಿ ರಸ್ತೆ ನಿರ್ಮಾಣ ಹಾಗೂ ಅಡ್ಡಮೋರಿಗಳ ನಿರ್ಮಾಣ ಕಾಮಗಾರಿ. | 10.00 | 20000/- | 2500.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 5. | ಹೇಮಾವತಿ ಎಡದಂಡೆ ನಾಲೆ 9ಎ ವಿ.ನಾ.ಯ. ಸರಪಳಿ 1800 ಮೀ ನಿಂದ 3000 ಮೀ ಮತ್ತು 4500 ಮೀ ನಿಂದ 6000 ಮೀ ವರೆಗೆ ಕಾಂಕ್ರೀಟ್ ಲೈನಿಂಗ್ ಮಾಡುವುದು. | 10.00 | 20000/- | 2500.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |

| 1 | 2 | 3 | 4 | 5 | 6 | 7 |
|---|---|---|---|---|---|---|
| 6. | ಹೇಮಾವತಿ ಎಡದಂಡೆ ನಾಲೆ 9ಎ ವಿ.ನಾ.ಯ ಸರಪಳಿ 7000 ಮೀ ನಿಂದ 8500 ಮೀ ವರೆಗೆ ಕಾಂಕ್ರೀಟ್ ಲೈನಿಂಗ್ ಮಾಡುವುದು. | 6.00 | 12000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 7. | ಹೇಮಾವತಿ ಎಡದಂಡೆ ನಾಲೆಯಡಿ ಬರುವ ದೇವನಗರ ಪುನರ್ವಸತಿ ಗ್ರಾಮದಲ್ಲಿ ಸಮುದಾಯ ಭವನದ ಪಕ್ಕದಲ್ಲಿ ಅಡಿಗೆಮನೆ ಮತ್ತು ಊಟದ ಹಾಲ್ ನಿರ್ಮಾಣದ ಕೆಲಸ. | 8.00 | 16000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 8. | ಹೇಮಾವತಿ ಎಡದಂಡೆ ನಾಲೆಯಡಿ ಬರುವ ದೇವನಗರ ಪುನರ್ವಸತಿ ಗ್ರಾಮದಲ್ಲಿ ಹರಿಜನ ಕಾಲೋನಿಯಲ್ಲಿ ಸಮುದಾಯ ಭವನ ನಿರ್ಮಾಣ ಕಾಮಗಾರಿ. | 7.00 | 14000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 9. | ಹೇಮಾವತಿ ಎಡದಂಡೆ ನಾಲೆಯಡಿ ಬರುವ ವಿ.ನಾ. 9ಸಿ ಅಡಿಯಲ್ಲಿ ಬರುವ ಕೆ.ಬಿ.ಪಾಳ್ಯ ಗ್ರಾಮದಲ್ಲಿ ಸಮುದಾಯ ಭವನ ನಿರ್ಮಾಣ ಮಾಡುವ ಕಾಮಗಾರಿ. | 6.00 | 12000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 10. | ಹೊಳೆನರಸೀಪುರ ಹಾಸನ ಮುಖ್ಯ ರಸ್ತೆ ಕಾಮಸಮುದ್ರದಿಂದ ಹೇಮಾವತಿ ಹೊಳೆದಂಡೆಗೆ ಹೋಗುವ ರಸ್ತೆಯ ಮೆಟಲಿಂಗ್ ಹಾಗೂ ಅಭಿವೃದ್ಧಿ ಪಡಿಸುವುದು. | 8.00 | 16000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 11. | ಕಾಮಸಮುದ್ರ ಪುನರ್ವಸತಿ ಕಾಲೋನಿ ದೇವನಗರ ದೇವಸ್ಥಾನದ ಉದ್ಯಾನವನಕ್ಕೆ ತಂತಿ ಬೇಲಿ ನಿರ್ಮಿಸುವುದು. | 6.00 | 12000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 12. | ಹೇಮಾವತಿ ಎಡದಂಡೆ 9 ಆರ್ ವಿ.ನಾಲೆ ಅಡಿಯಲ್ಲಿ ಬರುವ ಕಾಮಸಮುದ್ರ ಪು: ಗ್ರಾಮದ ಹರಿಜನ ಕಾಲೋನಿಗೆ ಒಳಚರಂಡಿ ಮತ್ತು ರಸ್ತೆಗೆ ರಿಮೆಟಲಿಂಗ್ ಮಾಡುವುದು. | 6.00 | 12000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 13. | ಹೇಮಾವತಿ ಎಡದಂಡೆ ನಾಲೆಯಡಿ ಬರುವ ವಿ.ನಾಲೆ 9ಸಿ: ನ ಸರಪಳಿ 400 ಮೀನಿಂದ 1.50 ಕಿ.ಮೀ. ಒಡ್ಡರಪಾಳ್ಯದ ಗ್ರಾಮದವರೆಗೆ ನಾಲೆ ಲೈನಿಂಗ್ ದುರಸ್ಥಿ ತೂಬುಗಳು ಕಲ್ವರ್ಟ್‌ಗಳು ಹಾಗೂ ಡ್ರಾಫ್‌ಗಳನ್ನು ಪುನರ್ ನಿರ್ಮಿಸುವುದು. | 6.00 | 12000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 14. | ಹೇಮಾವತಿ ಎಡದಂಡೆ ನಾಲೆಯಡಿ ಬರುವ ವಿ.ನಾಲೆ ಸರಪಳಿ 29675 ಮೀ ನಲ್ಲಿ ಬರುವ ಹೆಚ್ಚುವರಿ ತೂಬಿನ ನಾಲೆಯನ್ನು ಅಭಿವೃದ್ಧಿಪಡಿಸುವುದು. | 6.00 | 12000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |
| 15. | ವಾಟೆಹೊಳೆ ಜಲಾಶಯದ ಎಡದಂಡೆ ಮತ್ತು ಬಲದಂಡೆ ನಾಲೆಯ ಮುಖ್ಯ ತೂಬಿನ ಗೇಟುಗಳ ದುರಸ್ಥಿ. | 7.00 | 14000/- | 2000.00 | 4 ತಿಂಗಳು | 3ನೇ ದರ್ಜೆ, ಮೇಲ್ಪಟ್ಟು |

**ಸೂಚನೆಗಳು:**

1. ಟೆಂಡರ್‌ಗಳು ನಿಯಮಿತ ಫಾರಂ ನಲ್ಲಿರಬೇಕು. ಅವುಗಳನ್ನು ಎಕ್ಸಿಕ್ಯುಟಿವ್ ಇಂಜಿನಿಯರ್ ಕಾ.ನೀ.ನಿ.ನಿ. ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಸನ ಜಿಲ್ಲೆ ಇವರಿಗೆ ಹಿಂದಿರುಗಿಸಲಾಗದ ಮೊತ್ತವನ್ನು ನಗದಾಗಿ ಅಥವಾ ಮನಿಆರ್ಡರ್ ಮೂಲಕ ನಿಯಮಿತ ದಿನಾಂಕದೊಳಗೆ ಪಾವತಿ ಮಾಡಿ ಪಡೆಯಬಹುದು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಟೆಂಡರ್‌ಗಳನ್ನು ಅಂಚೆ ಮೂಲಕ ಕಳಿಸಬೇಕಾದಲ್ಲಿ ಪ್ರತಿಸೆಟ್ಟಿಗೆ ರೂ.100-00 ಹೆಚ್ಚಿನ ಮೊತ್ತವನ್ನು ಇತರೆ ಸಾದಿಲ್ವಾರು ವೆಚ್ಚಗಳನ್ನು ಭರಿಸಲೋಸುಗ ನಗದು ಮನಿಆರ್ಡ್‌ರ್ ಮೂಲಕ ಕಳಿಸತಕ್ಕದ್ದು. ಅಂಚೆ ರವಾನೆಯಲ್ಲಿ ಆಗಬಹುದಾದ ವಿಳಂಬಕ್ಕೆ ಜವಾಬ್ದಾರಿಯನ್ನು ವಹಿಸಿಕೊಳ್ಳಲಾಗುವುದಿಲ್ಲ.

2. ವಿವರವಾದ ತಪಶೀಲುಗಳು, ನಕಾಶೆ ಹಾಗೂ ಅಂದಾಜು ಪಟ್ಟಿ ಮತ್ತು ಇತರೆ ವಿವರಗಳನ್ನು ಗುತ್ತಿಗೆದಾರರು ಕೆಳಕಂಡ ಕಛೇರಿಯಲ್ಲಿ ಟೆಂಡರ್‌ಫಾರಂ ನೀಡಿಕೆಯ ಎಲ್ಲಾ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

3. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಅಂಗೀಕರಿಸುವ/ ನಿರಾಕರಿಸುವ ಹಕ್ಕನ್ನು ಸಂಬಂಧಪಟ್ಟ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ ಮತ್ತು ಟೆಂಡರ್‌ದಾರರು ಇದಕ್ಕೆ ಬದ್ಧರಾಗಿರುತ್ತಾರೆ. ರಜಾ ದಿನಗಳು ಮತ್ತು ಭಾನುವಾರ ಬಿಟ್ಟು ಬೆಳಿಗ್ಗೆ 10 ರಿಂದ ಸಂಜೆ 5.30ರ ವರೆಗೆ ಹೆಚ್ಚಿನ ವಿವರಗಳಿಗೆ ವಿಚಾರಿಸತಕ್ಕದ್ದು.

4. ಟೆಂಡರ್ ಜೊತೆಯಲ್ಲಿ ರಿಜಿಸ್ಟ್ರೇಶನ್ ಸರ್ಟಿಫಿಕೇಟ್ ಲಗತ್ತಿಸಿರಬೇಕು ಹಾಗೂ ಟೆಂಡರ್‌ಗೆ ಅರ್ಜಿ ಸಲ್ಲಿಸುವಾಗ ಮತ್ತು ಖಾಲಿ ಟೆಂಡರ್‌ಫಾರಂ ಪಡೆಯುವಾಗ ಗುತ್ತಿಗೆದಾರರು ಕಡ್ಡಾಯವಾಗಿ ನೋಂದಣಿ ಪಾಸ್‌ಬುಕ್ ತರತಕ್ಕದ್ದು.

5. ಖಾಲಿ ಟೆಂಡರ್‌ಫಾರಂ ಪಡೆದ ನಂತರ ಗುತ್ತಿಗೆದಾರರು ತಪ್ಪದೆ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು, ಇಲ್ಲದಿದ್ದರೆ ಅಂತಹ ಗುತ್ತಿಗೆದಾರರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳಲಾಗುವುದು.

6. ನಿಗದಿತ ವೇಳೆಯಲ್ಲಿ ಸಲ್ಲಿಸದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.

7. ಮೇಲ್ಕಂಡ ಯಾವುದಾದರೂ ದಿನಗಳು ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವೆಂದು ಪರಿಗಣಿಸುವುದು.

8. ನಿಗದಿತ ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ನಗದೀಕರಿಸಲ್ಪಡುವಂತೆ ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್. ಅನ್ನು ಎಕ್ಸಿಕ್ಯುಟಿವ್ ಇಂಜಿನಿಯರ್, ಕಾ.ನೀ.ನಿ.ನಿ., ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು, ಹಾಗೂ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್‌ಗಳನ್ನು ಕೆಳಗೆ ಸಹಿ ಮಾಡಿರುವವರ ಹೆಸರಿನಲ್ಲಿ ಅಡವಿಟ್ಟು ಸಲ್ಲಿಸತಕ್ಕದ್ದು. ಸಲ್ಲಿಸಿದ ಇ.ಎಂ.ಡಿ. ವ್ಯಾಲಿಡಿಟಿ ಅವಧಿಯು ಟೆಂಡರ್ ತೆರೆದ ದಿನಾಂಕದಿಂದ 90 ದಿನಗಳ ವರೆಗೆ ಚಾಲ್ತಿಯಲ್ಲಿರಬೇಕು. ಕಾರಣಾಂತರಗಳಿಂದ ಹೆಚ್ಚು ಅವಧಿ ಕಂಡುಬಂದರೆ ಗುತ್ತಿಗೆದಾರರು ಹೆಚ್ಚಿನ ಅವಧಿಯನ್ನು ವಿಸ್ತರಿಸಲು ಸಿದ್ಧರಿರಬೇಕಾಗಿರುತ್ತದೆ.

9. ಐಟಂ ನಂ.15ರ ಕಾಮಗಾರಿಗೆ ಗುತ್ತಿಗೆದಾರರು ಅಥವಾ ಸಂಸ್ಥೆಯವರು ಇದೇ ತರಹದ ಕಾಮಗಾರಿ ನಿರ್ವಹಿಸಿರುವ ಅನುಭವ ಇರುವವರು ದೃಢೀಕರಣ ಪತ್ರದೊಂದಿಗೆ ಅರ್ಜಿ ಸಲ್ಲಿಸುವುದು.

ಎಕ್ಸಿಕ್ಯುಟಿವ್ ಇಂಜಿನಿಯರ್,
ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು.

ಪಿ.ಡಿ. 39

**KARNATAKA STATE BOARD OF WAKFS**
**"DARUL AWKAF' No.6, Cunningham Road, Bangalore**
**CERTIFICATE OF REGISTRATION**
**No. KSBW/ REG/ 9/ BNU/ 2005-06, Bangalore, Dated: 17th November, 2005**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl. No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 472 | Masjid-e-Albadar and Madrasa, Meerajun Nabi, Jakkur Layout, Jakkur Post, Bangalore-560064. | **Properties**<br>1. Masjid-e-Albadar, Situated in Site No.473, & 474 of Sy.No.100, 101 & 102 of Jakkur Village, Bangalore North Taluk.<br>Measurement: 40'x60'<br>**Bounded by**<br>East: Jakkur Main Road,<br>West: Private Property.<br>North: Private Property.<br>South Road.<br>2. Site of Madrasa Meerajun Nabi, Vacant Site bearing No.17, Ist cross in Sy.No.100 & 101 of Jakkur Village, Bangalore North Taluk.<br>**Measuring:**<br>East to West: 40'<br>North to South: 30'<br>**Bounded by:**<br>East:Cross Road.<br>West: Private Property.<br>North: Private Property.<br>South: Private Property. | The President, Masjid-e-Albadar & Madrasa, Meerajun Nabi, Jakkur Layout, Jakkur Post, Bangalore-64. |

Chief Executive Officer,
**KARNATAKA STATE BOARD OF WAKFS.**

P.D. 40

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಪಿ.ಓ. ಬಾಕ್ಸ್ ನಂ.7648, ಬೆಂಗಳೂರು-76

## ಟೆಂಡರ್ ಪ್ರಕಟಣೆ

**ಸಂಖ್ಯೆ:ತೋಇ: ಜೀವತಾ: ತೋಉನಿ: ಅಂಕೃ: ಸತೋಅ 1: 68: 2005-06, ದಿನಾಂಕ: 27ನೇ ಫೆಬ್ರವರಿ, 2006**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು-76 ಇಲ್ಲಿ ಸ್ಥಾಪಿಸಲಾಗಿರುವ ವಿವಿಧ ಪ್ರಯೋಗಶಾಲೆಗಳಿಗೆ 2006-07ನೇ ಸಾಲಿನಲ್ಲಿ ಅಗತ್ಯವಿರುವ ಪ್ರಯೋಗಶಾಲಾ ರಾಸಾಯನಿಕಗಳು, ಗಾಜಿನ ಉಪಕರಣಗಳು, ಯಂತ್ರೋಪಕರಣಗಳು, ಸರ್ಜಿಕಲ್ ಉಪಕರಣಗಳು, ಪರಿಕರಗಳು, ಇತರೆ ಸಾಮಗ್ರಿಗಳ ಖರೀದಿ, ಗಿಡಗಳನ್ನು ಸರಬರಾಜು ಮಾಡಲು ಮೂರು ಅಂತಸ್ತುಗಳುಳ್ಳ ಸಾಗಾಣಿಕಾ ವಾಹನವನ್ನು ಒದಗಿಸುವ ಬಗ್ಗೆ ಹಾಗೂ ವಿವಿಧ ಪ್ರಯೋಗಶಾಲಾ ಕೆಲಸಗಳು, ಸಸ್ಯಾಭಿವೃದ್ದಿ ಕೆಲಸಗಳು, ತೋಟಗಾರಿಕೆ ಕೆಲಸಗಳು, ಯಂತ್ರೋಪಕರಣಗಳ ನಿರ್ವಹಣಾ ಕೆಲಸಗಳು ಇತ್ಯಾದಿ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ, ನೆರಳು ಪರದೆ ಪೆಂಡಾಲಿನ ನಿರ್ಮಾಣ ಹಾಗೂ ಔಷಧಿಯ ಮತ್ತು ಸುಗಂಧಿತ ಗಿಡಗಳ ಸಸಿಗಳನ್ನು ಸರಬರಾಜು ಮಾಡುವ ಬಗ್ಗೆ ವಿವಿಧ ಸಂಸ್ಥೆಗಳು, ಗುತ್ತಿಗೆದಾರರು ಹಾಗೂ ಸರಬರಾಜುದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಪ್ರಯೋಗಶಾಲಾ ರಾಸಾಯನಿಕಗಳು, ಗಾಜಿನ ಉಪಕರಣಗಳು, ಯಂತ್ರೋಪಕರಣಗಳು, ಸರ್ಜಿಕಲ್ ಉಪಕರಣಗಳು, ಪರಿಕರಗಳು, ಇತರೆ ಸಾಮಗ್ರಿಗಳ ಖರೀದಿ, ಗಿಡಗಳನ್ನು ಸರಬರಾಜು ಮಾಡಲು ಮೂರು ಅಂತಸ್ತುಗಳುಳ್ಳ ಸಾಗಾಣಿಕಾ ವಾಹನವನ್ನು ಒದಗಿಸುವ ಬಗ್ಗೆ ಹಾಗೂ ವಿವಿಧ ಪ್ರಯೋಗಶಾಲಾ ಕೆಲಸಗಳು, ಸಸ್ಯಾಭಿವೃದ್ದಿ ಕೆಲಸಗಳು, ತೋಟಗಾರಿಕೆ ಕೆಲಸಗಳು, ಯಂತ್ರೋಪಕರಣಗಳ ನಿರ್ವಹಣಾ ಕೆಲಸಗಳು ಇತ್ಯಾದಿ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ, 9 ನೆರಳು ಪರದೆ ಪೆಂಡಾಲಿನ ನಿರ್ಮಾಣ ಹಾಗೂ ಔಷಧಿಯ ಮತ್ತು ಸುಗಂಧಿತ ಗಿಡಗಳ ಸಸಿಗಳನ್ನು ಸರಬರಾಜು ಮಾಡುವ ಬಗ್ಗೆ ತಗಲುವ ವೆಚ್ಚವನ್ನು ಪ್ರತ್ಯೇಕ ಟೆಂಡರುಗಳಲ್ಲಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ: 03.04.2006 ರಿಂದ 12.04.2006ರ ಸಂಜೆ 5.00 ಘಂಟೆಯ ಒಳಗೆ ಪಡೆಯಬಹುದು.

ಟೆಂಡರ್ ಫಾರಂನ ಮೊತ್ತ ರೂ.25/- ಮೊಹರಾದ ಟೆಂಡರುಗಳು ಮೇಲೆ ಸದರಿ ಪ್ರಯೋಗಶಾಲಾ ರಾಸಾಯನಿಕಗಳು, ಗಾಜಿನ ಉಪಕರಣಗಳು, ಯಂತ್ರೋಪಕರಣಗಳು, ಸರ್ಜಿಕಲ್ ಉಪಕರಣಗಳು, ಪರಿಕರಗಳು, ಇತರೆ ಸಾಮಗ್ರಿಗಳ ಖರೀದಿ, ಗಿಡಗಳನ್ನು ಸರಬರಾಜು ಮಾಡಲು ಮೂರು ಅಂತಸ್ತುಗಳುಳ್ಳ ಸಾಗಾಣಿಕಾ ವಾಹನವನ್ನು ಒದಗಿಸುವ ಬಗ್ಗೆ ಹಾಗೂ ವಿವಿಧ ಪ್ರಯೋಗಶಾಲಾ ಕೆಲಸಗಳು, ಸಸ್ಯಾಭಿವೃದ್ದಿ ಕೆಲಸಗಳು, ತೋಟಗಾರಿಕೆ ಕೆಲಸಗಳು, ಯಂತ್ರೋಪಕರಣಗಳ ನಿರ್ವಹಣಾ ಕೆಲಸಗಳು ಇತ್ಯಾದಿ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ, ನೆರಳು ಪರದೆ ಪೆಂಡಾಲಿನ ನಿರ್ಮಾಣ ಹಾಗೂ ಔಷಧೀಯ ಮತ್ತು ಸುಗಂಧಿತ ಗಿಡಗಳ ಸಸಿಗಳನ್ನು ಸರಬರಾಜು ಮಾಡುವ ಬಗ್ಗೆ ಟೆಂಡರ್ ಎಂದು ಪ್ರತ್ಯೇಕವಾಗಿ ನಮೂದಿಸಿ ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರೆಗೆ ದಿನಾಂಕ: 13.04.2006ರ 2.00 ಗಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ಬಯೋಟೆಕ್ನಾಲಜಿ ಕೇಂದ್ರದ ಆವರಣದಲ್ಲಿ ತೆರೆಯಲಾಗುವುದು.

ತೋಟಗಾರಿಕೆ ನಿರ್ದೇಶಕರು.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಪಿ.ಓ. ಬಾಕ್ಸ್ ನಂ.7648, ಬೆಂಗಳೂರು-76

## ಟೆಂಡರ್ ನಿಯಮಾವಳಿಗಳು

**ಸಂಖ್ಯೆ:ತೋಇ: ಜೀವತಾ: ತೋಉನಿ: ಅಂಕೃ: ಸತೋಅ 1: 68: 2005-06, ದಿನಾಂಕ: 27ನೇ ಫೆಬ್ರವರಿ, 2006**

1. ಟೆಂಡರ್ ಫಾರಂ ಬೆಲೆ ರೂ. 25/- ಮಾತ್ರ. ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫಾರಂ ಹಣ ಹಿಂತಿರುಗಿಸಲಾಗುವುದಿಲ್ಲ.
2. ಟೆಂಡರ್ ಫಾರಂನ್ನು ತೋಟಗಾರಿಕೆ ಉಪನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಮಾತ್ರ ಕೊಡಲಾಗುತ್ತದೆ. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
3. ಟೆಂಡರ್ ಫಾರಂ ದಿನಾಂಕ: 03.04.2006 ರಿಂದ 12.04.2006ರ ಸಂಜೆ 5.00 ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಾಸ್ಸು ನೀಡಲು ಅಂತಿಮ ದಿನಾಂಕ: 13.04.2006 ಮಧ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
4. ಟೆಂಡರನ್ನು ದಿನಾಂಕ: 13.04.2006 ರಂದು ಸಂಜೆ 4.00 ಗಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.
5. ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ಪ್ರಯೋಗಶಾಲಾ ರಾಸಾಯನಿಕಗಳು, ಗಾಜಿನ ಉಪಕರಣಗಳು, ಯಂತ್ರೋಪಕರಣಗಳು, ಸರ್ಜಿಕಲ್ ಉಪಕರಣಗಳು, ಪರಿಕರಗಳು, ಇತರೆ ಸಾಮಗ್ರಿಗಳ ಖರೀದಿ, ಗಿಡಗಳನ್ನು ಸರಬರಾಜು ಮಾಡಲು ಮೂರು ಅಂತಸ್ತುಗಳುಳ್ಳ ಸಾಗಾಣಿಕಾ ವಾಹನವನ್ನು ಒದಗಿಸುವ ಬಗ್ಗೆ ಹಾಗೂ ವಿವಿಧ ರೀತಿಯ ಪ್ರಯೋಗಶಾಲಾ ಕೆಲಸಗಳು, ವಿಶ್ಲೇಷಣಾ ಕೆಲಸಕಾರ್ಯಗಳು, ಹುಲ್ಲು ಹಾಸು ನಿರ್ವಹಣೆ ಹಾಗೂ ವಿವಿಧ ತೋಟಗಾರಿಕೆ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ನಿರ್ವಹಿಸುವ ಬಗ್ಗೆ, ನೆರಳು ಪರದೆ ಪೆಂಡಾಲಿನ ನಿರ್ಮಾಣ, ಔಷಧೀಯ ಮತ್ತು ಸುಗಂಧಿತ ಗಿಡಗಳ ಸಸಿಗಳನ್ನು ಸರಬರಾಜು ಮಾಡುವ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ಸರಬರಾಜು ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.
6. ತೆರಿಗೆ ಮತ್ತು ಅಬ್ಕಾರಿ ಶುಲ್ಕವನ್ನು ಸ್ಪಷ್ಟವಾಗಿ ನಮೂದಿಸುವುದು. ಪ್ಯಾಕಿಂಗ್ ಚಾರ್ಜ್, ಸಾಗಾಣಿಕೆ ವೆಚ್ಚ, ವಿಮೆ ಎಲ್ಲವನ್ನು ಸೇರಿಸಿ ತಗಲುವ ಕನಿಷ್ಟ ದರವನ್ನು ನಮೂದಿಸುವುದು.
7. ಟೆಂಡರುದಾರರು ನಮೂದಿಸುವ ಸಾಮಗ್ರಿಗಳಿಗೆ ಪ್ರತ್ಯೇಕವಾಗಿ ರೂ.2000/-ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಹಾಗೂ ವಿವಿಧ ರೀತಿಯ ಪ್ರಯೋಗಶಾಲಾ ಕೆಲಸಗಳು, ವಿಶ್ಲೇಷಣಾ ಕೆಲಸಕಾರ್ಯಗಳು, ಹುಲ್ಲು ಹಾಸು ನಿರ್ವಹಣೆ ಹಾಗೂ ವಿವಿಧ ತೋಟಗಾರಿಕೆ

